# The Capability of the Child

# ಮಗುವಿನ ಭಾಷಾ ಸಾಮರ್ಥ್ಯ

ಹೃದಯಕಾಂತ್ ದಿವಾನ್

***

ಪ್ರಾಥಮಿಕ ತರಗತಿಗಳಲ್ಲಿ ಭಾಷಾ ಶಿಕ್ಷಣ ಹಾಗೂ ಶಿಕ್ಷಕರು ತರಗತಿಯಲ್ಲಿರುವ ಮಗುವು ಅಪಾರ ಸಾಮರ್ಥ್ಯವಿರುವ ಜೀವಿ ಎಂಬ ಅಂಶವನ್ನು ಸಾಮಾನ್ಯವಾಗಿ ನಿರ್ಲಕ್ಷಿಸುತ್ತಾರೆ. ನಾಲ್ಕು ವರ್ಷದ ಮಗು ತನ್ನದೇ ಭಾಷೆಯಲ್ಲಿ ಸಂವಹನ ಮಾಡುವ, ಪರಿಕಲ್ಪಿಸುವ ಮತ್ತು ತರ್ಕಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಈ ಅರ್ಥದಲ್ಲಿ ಆ ಮಗು ಭಾಷಿಕವಾಗಿ ಪ್ರೌಢ ವಯಸ್ಕ ಮಗುವೇ ಸರಿ.. ನಾಲ್ಕು ವರ್ಷದ ಮಗುವು ದೈಹಿಕ ಕಾರ್ಯಗಳನ್ನು ಪೂರೈಸುವುದು, ದೈಹಿಕ ಸಂಬಂಧಗಳನ್ನೂ ಬದಲಾವಣೆಗಳನ್ನೂ ಸಮರ್ಥವಾಗಿ ಬಳಸಿಕೊಳ್ಳುವುದು, ಸಂಖ್ಯೆ ಮತ್ತು ಪ್ರಮಾಣದ ಕಲ್ಪನೆ ಹೊಂದಿರುವುದು, ಕಣ್ಣಮುಂದೆ ತಂದುಕೊಳ್ಳುವುದು ಮತ್ತು ಅಂದಾಜು ಮಾಡುವುದು ಸೇರಿದಂತೆ ಇನ್ನೂ ಅನೇಕ ಕೆಲಸಗಳನ್ನು ನಿರ್ವಹಿಸಬಲ್ಲದು. ತನ್ನ ಸುತ್ತಲಿನ ಜಗತ್ತಿನೊಂದಿಗೆ ಸಹಜವಾಗಿ ತೊಡಗಿಸಿಕೊಳ್ಳುವ ಮೂಲಕವೇ ಅದು ಇದನ್ನೆಲ್ಲ ಕಲಿತಿರುತ್ತದೆ.

ಈ ಎಲ್ಲ ಆರ್ಜಿತ ಕೌಶಲಗಳಲ್ಲಿ ಹೆಚ್ಚು ಪರಿಚಿತವಿರುವುದು ಭಾಷೆ. ಮನುಷ್ಯ ಜೀವಿಗೆ ಭಾಷೆಯೇ ಪ್ರಧಾನವಾದದ್ದು ಮತ್ತು ಮಗುವಿನ ಕಲಿಕೆಗೂ ಕೂಡ ಅದೇ ಮುಖ್ಯ. ಅದರ ಲೋಕ ಗ್ರಹಿಕೆಯು ಅದರ ಭಾಷೆಯಿಂದಲೇ ರೂಪುಗೊಂಡಿದ್ದೇ ಎಂಬುದು ಚರ್ಚಾಸ್ಪದವಾದದ್ದಾದರೂ ಅದು ಭಾಷೆಯಿಂದ ಪ್ರಭಾವಿತವಾಗುತ್ತದೆ ಎನ್ನುವುದಂತೂ ನಿಶ್ಚಿತ. ಭಾಷೆಯು ನಮ್ಮ ಅಸ್ತಿತ್ವದ ಪ್ರಮುಖ ಭಾಗ. ಭಾಷೆ ನಮ್ಮನ್ನು ನಿರ್ವಚಿಸುತ್ತದೆ; ನಮ್ಮ ಬೆಳವಣಿಗೆಯನ್ನು ರೂಪಿಸುತ್ತದೆ. ಈ ಅರ್ಥದಲ್ಲಿ ಅದು ನಮ್ಮ ಅಸ್ಮಿತೆಯ ಭಾಗ ಕೂಡ.

## ಮಗುವು ಎಲ್ಲಾ ಭಾಷಿಕ ಸನ್ನಿವೇಶಗಳನ್ನೂ ನಿಭಾಯಿಸಬಲ್ಲದು

ಶಾಲೆಗೆ ಬರುವ ಮಗುವಿನ ಸಾಮರ್ಥ್ಯವನ್ನು ಅರ್ಥಮಾಡಿಕೊಳ್ಳಲು ಅದು ತನ್ನ ಸುತ್ತಲಿನ ಇಡೀ ಸಮುದಾಯದೊಂದಿಗೆ ಯಥಾಯೋಗ್ಯವಾಗಿ ಸಂವಾದಿಸುತ್ತದೆ ಮತ್ತು ಮನೆಯಲ್ಲಿ ಎಲ್ಲ ಚಟುವಟಿಕೆಗಳಲ್ಲೂ ಸಮರ್ಥವಾಗಿ ಭಾಗವಹಿಸುತ್ತದೆ ಎಂಬುದನ್ನು ನಾವು ಗುರುತಿಸಬೇಕಾಗುತ್ತದೆ. ತನ್ನ ಸಾಮಾಜಿಕ, ಸಾಂಸ್ಕೃತಿಕ ಮತ್ತು ಭಾಷಿಕ ಪರಿಸರದ ಎಲ್ಲ ಸಂಕೀರ್ಣ ಘಟಕಗಳೊಂದಿಗೂ

ಅದು ಸಂವಾದಿಸಬಲ್ಲದು, ಸಕ್ರಿಯವಾಗಿ ತೊಡಗಿಸಿಕೊಳ್ಳಬಲ್ಲದು. ತಾನು ಭಾಗವಾಗಿರುವ ಅಥವಾ ತನಗೆ ಅನುಭವವಿರುವ ಯಾವುದೇ ಸಂದರ್ಭದಲ್ಲೂ ಮತ್ತು ಸಂದರ್ಭಕ್ಕಾಗಿಯೂ ಅದು ಭಾಷೆಯನ್ನು ಬಳಸಬಲ್ಲದು. ತಾನು ಮಾತನಾಡುತ್ತಿರುವ ವ್ಯಕ್ತಿಗಳು ಮತ್ತು ಸಂದರ್ಭವನ್ನು ಅನುಲಕ್ಷಿಸಿ ಸಂದರ್ಭಕ್ಕೆ ಸಮರ್ಪಕವಾಗುವಂತೆ ತನ್ನ ಭಾಷೆಯನ್ನು ಸೂಕ್ತವಾಗಿ ಸರಿ ಹೊಂದಿಸಿಕೊಳ್ಳಬಲ್ಲದು, ಅದು ತಪ್ಪು ಮಾಡುವುದೇ ಇಲ್ಲ ಅಥವಾ ಸಂವಹನದ ವಿಧಾನದ ಆಯ್ಕೆಯು ಅಸಮರ್ಪಕವಾಗಿರುವುದೇ ಇಲ್ಲ ಎಂದಲ್ಲ; ಆದರೆ ಅಂತಹ ತಪ್ಪುಗಳಿಗೆ ಸನ್ನಿವೇಶದ ಅನುಚಿತ ಗ್ರಹಿಕೆ ಕಾರಣವಾಗಿರುತ್ತದೆಯೇ ಹೊರತು ನಿರ್ದಿಷ್ಟ ಸನ್ನಿವೇಶಗಳಲ್ಲಿ ಹೇಗೆ ಮಾತನಾಡಬೇಕೆಂಬ ಅರಿವಿನ ಕೊರತೆಯಲ್ಲ. ತನಗಿಂತ ಹಿರಿಯರೊಂದಿಗೆ ಮಾತನಾಡುವಾಗ ಅಥವಾ ವಿನಂತಿ ಮಾಡಿಕೊಳ್ಳುವಾಗ ತಾನು ವಿನೀತ ಭಾವ ಪ್ರದರ್ಶಿಸಬೇಕೆಂದು ಅದಕ್ಕೆ ತಿಳಿದಿರುತ್ತದೆ ಮತ್ತು ಹಾಗೆ ವಿನೀತವಾಗಿರುವುದನ್ನು ಅದು ಆಯ್ದುಕೊಂಡಿರದಿದ್ದರೆ ಅದು ಸಕಾರಣವಾಗಿಯೇ ಇರುತ್ತದೆ. ಸಾಮಾಜಿಕ ಶ್ರೇಣಿಗಳನ್ನು ಅದು ಗ್ರಹಿಸಬಲ್ಲುದಲ್ಲದೆ ಸನ್ನಿವೇಶವನ್ನು ತನಗೆ ಅನುಕೂಲವಾಗುವಂತೆ ಹೇಗೆ ನಿರ್ವಹಿಸಬೇಕೆಂಬುದನ್ನೂ ಅದು ತಿಳಿದಿರುತ್ತದೆ. ತನ್ನ ಆಸೆಗಳನ್ನು ವ್ಯಕ್ತಪಡಿಸಲು, ಅನುಭವಗಳ ಕುರಿತು ಮಾತನಾಡಲು ಮತ್ತು ಭಾವನೆಗಳನ್ನು ಹಂಚಿಕೊಳ್ಳಲು ಅದು ಭಾಷೆಯನ್ನು ನಿರರ್ಗಳವಾಗಿ ಬಳಸುತ್ತದೆ. ಇವೆಲ್ಲ ಸಾಕಷ್ಟು ಸಂಕೀರ್ಣವಾದ ಕಾರ್ಯಗಳೇ. ಇವನ್ನು ನಿರ್ವಹಿಸಲು ಯಾವೆಲ್ಲ ಕೌಶಲಗಳು ಬೇಕಾಗುತ್ತದೆಂಬುದನ್ನು ವಿವರವಾಗಿ ವಿಶ್ಲೇಷಿಸಿದರೆ ಆ ಯಾದಿಯೇ ಬೆರಗುಗೊಳಿಸುವಂತಿರುತ್ತದೆ.

## ಮಗು ಮತ್ತು ಪರಿಕಲ್ಪನೆಗಳು

ಹೊಸ ವಿಚಾರಗಳನ್ನು ಕಲಿಯಲು ಮತ್ತು ತನ್ನ ಪರಿಕಲ್ಪನೆಗಳನ್ನು ನಿರ್ಮಿಸಿಕೊಳ್ಳಲು ಮಗು ಭಾಷೆಯನ್ನು ಬಳಸುತ್ತದೆ. ತನ್ನ ಅನುಭವದಿಂದಲೇ ಕಲಿಯುವ ವಿವಿಧ ಜ್ಞಾನ ಶಿಸ್ತುಗಳಿಗೆ ಸಂಬಂಧಿಸಿದ ಎಲ್ಲ ಬಗೆಯ ಪರಿಕಲ್ಪನೆಗಳನ್ನು ನಾಲ್ಕು ವರ್ಷದ ಮಗು ಸಂಪಾದಿಸಿರುತ್ತದೆ. ಉದಾಹರಣೆಗೆ: ಎಲ್ಲಾ ಬಗೆಯ ಸಾಮಾಜಿಕ ಮತ್ತು ಕೌಟುಂಬಿಕ ಸಂಬಂಧಗಳಿಗೆ ಸಂಬಂಧಿಸಿದ ಪರಿಕಲ್ಪನೆಗಳು, ಅವುಗಳಲ್ಲಿರುವ ವ್ಯತ್ಯಾಸಗಳು ಮತ್ತು ಶ್ರೇಣೀಕರಣ; ಕೃಷಿ ಮತ್ತು ಸಸ್ಯ ಜೀವನಕ್ಕೆ ಸಂಬಂಧಿಸಿದ ಪರಿಕಲ್ಪನೆಗಳು; ಹಬ್ಬಗಳು, ಮನೆಯ ಕೆಲಸ ಕಾರ್ಯಗಳಿಗೆ ಸಂಬಂಧಿಸಿದ ಪರಿಕಲ್ಪನೆಗಳು ಇತ್ಯಾದಿ. ಮಗುವು ಸ್ಪಂಜಿನಂತೆ ಮಾಹಿತಿಯನ್ನು ಹೀರಿಕೊಳ್ಳುತ್ತದೆ. ಇವುಗಳಲ್ಲಿ ಕೆಲವು ಮಾಹಿತಿಗಳನ್ನು ಸೂಕ್ತವಲ್ಲವೆಂದೊ ಇನ್ನು ಕೆಲವು ಅದು ತಿಳಿದಿರತಕ್ಕವೆಂದೋ ನಾವು ಪರಿಗಣಿಸಬಹುದು. ಆದರೆ ಅದು ಅವೆಲ್ಲವನ್ನೂ ಕಲಿತುಬಿಡುತ್ತದೆ. ಒಮ್ಮೆ ಅದು ಇವೆಲ್ಲದರಲ್ಲೂ ಪರಿಣತಿ ಗಳಿಸಿದ ಮೇಲೆ, ಸಂವಾದಿಸುವುದರಲ್ಲೂ ಸಮರ್ಥವಾದ ಮೇಲೆ ಅದಕ್ಕೆ ಅಡೆತಡೆ ಎಂಬುದೇ ಇರುವುದಿಲ್ಲ. ಅದು ಜನಗಳ, ಪಾತ್ರೆಗಳ, ಮರಗಳ, ಸಸ್ಯಗಳ, ಪ್ರಾಣಿಗಳ, ಋತುಗಳ

ಹೆಸರುಗಳಾಗಲಿ ಅಥವಾ ಯಾರು ಯಾವಾಗ ಬರುತ್ತಾರೆ, ಯಾರು ಎಲ್ಲಿಗೆ ಹೋಗುತ್ತಾರೆ, ಯಾರ್ಯಾರ ಸಂಬಂಧ ಏನೇನು ಎಂಬ ವಿವರಗಳಾಗಲಿ, ಪೇಟೆಯಲ್ಲಿ ನಡೆಯುವ ಸಂಭಾಷಣೆಗಳಾಗಲಿ, ಇನ್ನೂ ಹಲವು ಹತ್ತು ಸಂಗತಿಗಳಾಗಲಿ - ಮಗುವಿಗೆ ಇವೆಲ್ಲದರ ಬಗ್ಗೆ ತಿಳಿದಿರುತ್ತದೆ. ಇದಲ್ಲದೆ ಮಗು ಭಾಷೆಯನ್ನು ಬಳಸುತ್ತದೆ - ವಾದಗಳನ್ನು ಬೆಳೆಸಲು, ತನ್ನ ಹಕ್ಕುಗಳನ್ನು ರಕ್ಷಿಸಿಕೊಳ್ಳಲು, ಸನ್ನಿವೇಶಗಳನ್ನು ವಿಶ್ಲೇಷಿಸಲು ಮತ್ತು ತನ್ನದೇ ಕಲ್ಪನಾಲೋಕನವನ್ನು ಕಟ್ಟಿಕೊಳ್ಳಲು, ತನಗೆ ತಿಳಿದಿರುವ ಪದಗಳನ್ನೇ ಬಳಸಿ ಅದು ಆ ಜಗತ್ತನ್ನು ನಿರ್ಮಿಸಿಕೊಳ್ಳುತ್ತದೆ ಮತ್ತು ತನ್ನ ಕನಸುಗಳನ್ನು ಕಟ್ಟಿಕೊಳ್ಳುತ್ತದೆ.

**ಮಗು ಮತ್ತು ವಾಕ್ಯರಚನೆ**

ಪರಿಕಲ್ಪನೆಗಳ ಸಂಪಾದನೆ, ಧ್ವನಿಯ ಏರಿಳಿತ, ಸಂಭಾಷಣೆಯ ವ್ಯವಸ್ಥಿತ ಸಂಸ್ಕರಣೆ - ಇವುಗಳ ದೃಷ್ಟಿಯಿಂದ ಮಗುವಿನ ಸಾಮರ್ಥ್ಯವನ್ನು ಅರ್ಥಮಾಡಿಕೊಳ್ಳುವುದು ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದದ್ದು ವಾಕ್ಯ ರಚನೆಯ ಕುರಿತಾದ ಅದರ ಅಪ್ರಜ್ಞಾಪೂರ್ವಕವಾದ ತಿಳಿವಳಿಕೆಯನ್ನು ಅರಿತುಕೊಳ್ಳುವುದು. ತಾನು ವರ್ಣಿಸುತ್ತಿರುವ ಸನ್ನಿವೇಶವನ್ನು ಅವಲಂಬಿಸಿ ಮಗುವು ಕ್ರಿಯಾಪದದ ಎಲ್ಲಾ ರೂಪಗಳನ್ನು ಸಮರ್ಪಕವಾಗಿ ಬಳಸುತ್ತದೆ. ಮಗು ಆಡುತ್ತಿರುವ ಭಾಷೆಯಲ್ಲಿ ನಾಮಪದ ಮತ್ತು ಸರ್ವನಾಮದ ಹಲವು ರೂಪಗಳಿದ್ದರೆ ಅವುಗಳ ಸೂಕ್ತವಾದ ರೂಪವನ್ನು ಸಹ ಮಗು ಬಳಸುತ್ತದೆ. ತನ್ನದೇ ಭಾಷೆಯನ್ನು ಬಳಸುವಾಗ ಅದು ಸರಿಯಾದ ಕಾಲ, ರೂಪ, ಸೂಕ್ತವಾದ ವಚನ ಅಥವಾ ಲಿಂಗ ಮತ್ತು ಸಮರ್ಪಕವಾದ ಜೋಡಣೆ ಪದವನ್ನು ಬಳಸುವುದರಲ್ಲಿ ತಪ್ಪು ಮಾಡುವುದಿಲ್ಲ. ಮಗುವು ಸಂಭಾಷಣೆಯಲ್ಲಿ ಭಾಗಿಯಾಗುವ ವಿವಿಧ ಸಂದರ್ಭಗಳಿಂದ ಆಯ್ದ ಕೆಲವು (ಹತ್ತು ಎಂದಿಟ್ಟುಕೊಳ್ಳಿ) ವಾಕ್ಯಗಳನ್ನು ತೆಗೆದುಕೊಂಡು ವಿಶ್ಲೇಷಿಸಿದರೆ, ಈ ವಾಕ್ಯಗಳನ್ನು ರಚಿಸಲು ಪದಗಳನ್ನು ಪೋಣಿಸುವ ಅದ್ಭುತ ಸಾಮರ್ಥ್ಯವೂ ಪದಗಳನ್ನು ಹೇಗೆ ಜೋಡಿಸಬೇಕೆಂಬುದರ 'ಸುಪ್ತಪ್ರಜ್ಞೆ'ಯಲ್ಲಿ ನಿಹಿತವಾದ ತಿಳಿವಳಿಕೆಯೂ ಬೇಕಾಗುತ್ತದೆನ್ನುವುದು ಅರಿವಾಗುತ್ತದೆ. ಮೂರು-ನಾಲ್ಕು ವರ್ಷ ವಯಸ್ಸಿನ ಮಗುವೊಂದು ಬಳಸಿದ ವಾಕ್ಯಗಳ ಸೂಕ್ಷ್ಮ ವ್ಯತ್ಯಾಸಗಳನ್ನು ಗಮನಿಸಿದರೆ ಆ ಮಗುವಿನ ಸಾಮರ್ಥ್ಯವೇನೆಂಬುದು ತಿಳಿಯುತ್ತದೆ.

ಮಗುವು ನಿರಂತರವಾಗಿ ಹೊಸ ಪದಗಳನ್ನು ಎದುರಾಗುತ್ತಲೇ ಇರುತ್ತದೆ ಎಂಬುದನ್ನು ನಾವು ಪರಿಗಣಿಸುವುದು ಅಗತ್ಯ. ಒಮ್ಮೆ ಅದು ಒಂದು ಪದವನ್ನೂ ಅದರ ಸ್ಥೂಲ ಅರ್ಥವನ್ನೂ ಅರಿಯಿತೆಂದರೆ ಅದು ಅದರ ಆಳವಾದ ತಿಳಿವಳಿಕೆಯನ್ನು ಬೆಳೆಸಿಕೊಳ್ಳಲು ಪದದ ಎಲ್ಲಾ ರೂಪಗಳ ಪೂರ್ವಪರಿಚಯವಿಲ್ಲದೆಯೂ ತಾನು ಅಪ್ರಜ್ಞಾಪೂರ್ವಕವಾಗಿ ಗ್ರಹಿಸಿರುವ ಭಾಷಾನಿಯಮಗಳನ್ನು

ಬಳಸಿಕೊಂಡು ಆ ಎಲ್ಲಾ ರೂಪಗಳನ್ನೂ ಸಹಜವಾಗಿ ನಿರ್ಮಿಸಿಕೊಳ್ಳಬಲ್ಲದಾಗಿರುತ್ತದೆ. ಇವುಗಳಲ್ಲಿ ಹಲವು ನಿಯಮಗಳನ್ನು ಭಾಷಾಶಾಸ್ತ್ರಜ್ಞರು ಗುರುತಿಸಿದ್ದಾರೆ; ಕೆಲವು ನಿಯಮಗಳು ಪುಸ್ತಕಗಳಲ್ಲಿ ಸೇರ್ಪಡೆಯಾಗಿವೆ; ಆದರೆ ಹಲವನ್ನು ಇನ್ನೂ ಹೊರತೆಗೆದು ಗುರುತಿಸುವುದು ಸಾಧ್ಯವಾಗಿಲ್ಲ. ಯಾವುದೇ ಭಾಷೆಯಲ್ಲೇ ಆದರೂ, ಈಗಿರುವುದಕ್ಕಿಂತಲೂ ಉತ್ತಮವಾದ ವ್ಯಾಕರಣವನ್ನು ನಿರ್ಮಿಸಲು ಮತ್ತು ವಿವಿಧ ಸಂದರ್ಭಗಳನ್ನು ಒಳಗೊಳ್ಳಬಲ್ಲ ನಿಯಮಗಳನ್ನು ರೂಪಿಸಲು ಭಾಷಾಶಾಸ್ತ್ರಜ್ಞರು ಸದಾ ಪ್ರಯತ್ನಿಸುತ್ತಲೇ ಇರುತ್ತಾರೆ. ಈ ಎಲ್ಲ ನಿಯಮಗಳನ್ನು ರೂಪಿಸುವುದಕ್ಕೆ ಮತ್ತು ಅಭಿವ್ಯಕ್ತಿಸುವುದಕ್ಕೆ ಎಷ್ಟೋ ಮೊದಲೇ ಆ ಭಾಷೆಯ ಎಲ್ಲ ಮೂಲ ಭಾಷಿಕರೂ ತಮ್ಮೆಲ್ಲರ ಪಾರಸ್ಪರಿಕ ತಿಳಿವಳಿಕೆಯ ಮೂಲಕ ಅವನ್ನು ಬಳಸುತ್ತಲೇ ಇದ್ದರು. ಇತ್ತೀಚೆಗೆ ಬದಲಾದವೂ ಸೇರಿದಂತೆ ಈ ಎಲ್ಲ ನಿಯಮಗಳ ಅಂತಸ್ಥ ತಿಳಿವಳಿಕೆ ಸಹಿತ ಮಗುವಿಗೆ ಲಭ್ಯವಿರುತ್ತದೆ.

**ಮಗು ಇದನ್ನು ಆರ್ಜಿಸಿದ್ದು ಹೇಗೆ?**

ಮಾನವ ಸಂವಹನಗಳ ಅನುಪಸ್ಥಿತಿಯಲ್ಲಿ ಭಾಷೆ ಬೆಳೆಯುವುದಿಲ್ಲ ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ವಿಭಿನ್ನ ಹಿನ್ನೆಲೆಯಿಂದ ಬಂದ ವಿಭಿನ್ನ ಸಮುದಾಯಗಳಿಗೆ ಸೇರಿದ ಮಕ್ಕಳು ವಿಭಿನ್ನ ಸಾಮರ್ಥ್ಯಗಳನ್ನು ಪಡೆದುಕೊಳ್ಳುತ್ತಾರೆ ಮತ್ತು ಅವರ ಅನುಭವವು ತಿಳಿವಳಿಕೆಯನ್ನು ಪ್ರಭಾವಿಸುತ್ತದೆ ಎಂಬುದನ್ನು ತೋರಿಸಲೂ ಸಹ ಸಾಕಷ್ಟು ಪುರಾವೆಗಳಿವೆ. ಕಲಿಕೆಯು ಏಕರೂಪದ್ದಾಗಿರದಿದ್ದರೂ ಸಹಿತ, ಸ್ಥೂಲವಾಗಿ ಕೆಲವು ಸಾಮಾನ್ಯ ಲಕ್ಷಣಗಳು ಮತ್ತು ಕಲಿಕೆಯ ಸಾಮಾನ್ಯ ಹಂತಗಳನ್ನು ಗುರುತಿಸುವುದು ಸಾಧ್ಯ. ವಯಸ್ಕರು ಮಕ್ಕಳ ಕಲಿಕಾ ಪ್ರಕ್ರಿಯೆಯನ್ನು ಬೆಂಬಲಿಸಲು ಪ್ರಯತ್ನಿಸುತ್ತಾರೆಂಬುದನ್ನು ನಾವು ನಮ್ಮ ಅನುಭವದಿಂದ ತಿಳಿದಿದ್ದೇವೆ. ಇದನ್ನವರು ತಾವು ಅತ್ಯುತ್ತಮವೆಂದುಕೊಂಡ ರೀತಿಯಲ್ಲಿ ಮಾಡುತ್ತಾರೆ. ಅದು ಕೆಲವು ಸಂದರ್ಭಗಳಲ್ಲಿ ಮಕ್ಕಳಿಗೆ ಸುಲಭವಾಗುವಂತೆ ಅವರಂತೆಯೇ ಮಾತನಾಡುವುದಿರಬಹುದು ಅಥವಾ ವಾಕ್ಯಗಳನ್ನು ಮುರಿದು ಸರಳಗೊಳಿಸಿ ಮಕ್ಕಳು ಅದನ್ನು ಮನನ ಮಾಡಿಕೊಂಡು ಅನುಕರಿಸುವಂತೆ ಮಾಡುವುದಿರಬಹುದು ಅಥವಾ ಮಗು ಮಾಡಿದ ತಪ್ಪುಗಳನ್ನು ತಿದ್ದಿ, ಆ ತಿದ್ದಿದ ವಾಕ್ಯವನ್ನು ಮಗು ಹಲವು ಬಾರಿ ಹೇಳುವಂತೆ ಮಾಡುವುದಿರಬಹುದು, ಇಂತಹ ತಿದ್ದುಪಡಿಗಳ ಮಹತ್ತ್ವವನ್ನು ಸಮಾಲೋಚಿಸುವುದಿರಬಹುದು, ಚರ್ಚಿಸುವುದಿರಬಹುದು. ಆದರೆ ಒಂದಂತೂ ಸ್ಪಷ್ಟ; ಮಗುವಿನ ಕುರಿತಾದ ಕಾಳಜಿಯ ಅಭಿವ್ಯಕ್ತಿಯಿದು ಮತ್ತು ಮಗುವಿನ ಸ್ವಾಭಿಮಾನವನ್ನು ಗೌರವಿಸುವುದರ ಗುರುತು ಕೂಡ. ಈ ಗುರುತಿಸುವಿಕೆ ಮತ್ತು ಪ್ರೋತ್ಸಾಹ ಮಗುವಿನ ಕಲಿಕೆಗೆ ಬಹಳ ಮುಖ್ಯವಾದದ್ದು.

ಆದಾಗ್ಯೂ ಈ ಪ್ರೇರೇಪಣೆ, ಮುನ್ನಡೆಸುವಿಕೆ ಮತ್ತು ಮಾರ್ಗದರ್ಶನದಿಂದಲೇ ಹೆಚ್ಚಿನದನ್ನು ಕಲಿಯಲಾಗುವುದಿಲ್ಲ ಎಂಬುದು ಸ್ಪಷ್ಟವಾಗಿದೆ. ಮಗುವಿನ ಸಾಮರ್ಥ್ಯ ಮತ್ತು ತಿಳಿವಳಿಕೆ ಈ

ಪ್ರಕ್ರಿಯೆಯಿಂದ ಅಭಿವೃದ್ಧಿಪಡಿಸಬಹುದಾದದ್ದಕ್ಕಿಂತ ಹೆಚ್ಚಿಗೆ ಇರುತ್ತದೆ. ಮಗುವಿಗೆ ಇಂತಹ ಎಷ್ಟು ತಿದ್ದುಪಡಿಗಳನ್ನು ಮಾಡಲು ನಾವು ಸಹಾಯ ಮಾಡಬಹುದು? ಮಗುವಿನ ಕಲಿಕೆಗೆ ನಾವು ಅದೆಷ್ಟು ಮಾರ್ಗದರ್ಶನ ಮಾಡಬಹುದು? ಯಾವುದನ್ನು ಮಗು ಬೇಗ ಕಲಿಯಬಾರದೆಂದು ನಾವು ಬಯಸುತ್ತೇವೋ ಅದನ್ನು ಮಕ್ಕಳು ಬೇಗ ಕಲಿಯುತ್ತಾರೆಂಬುದು ನಮಗೆ ಗೊತ್ತು. ನಾವು ಪ್ರಜ್ಞಾಪೂರ್ವಕವಾಗಿ ತಿಳಿದಿರದ ಎಷ್ಟೋ ಸಂಗತಿಗಳನ್ನೂ ಮಕ್ಕಳು ಕಲಿತಿರುತ್ತಾರೆ. ಮಗುವಿನ ತಿಳಿವಳಿಕೆಯ ಈ ವಿಸ್ತಾರವು - ಪ್ರಜ್ಞಾಪೂರ್ವಕ ಕಲಿಕಾ ಪ್ರಕ್ರಿಯೆಗಿಂತ ಸಮಾಜದೊಂದಿಗಿನ ಸಹಜ ಒಡನಾಟ ಮತ್ತು ತೊಡಗಿಸಿಕೊಳ್ಳುವಿಕೆಯಿಂದಲೇ ಕಲಿಕೆ ಸಾಧ್ಯವಾಗುತ್ತದೆ - ಎಂಬ ವಾದಕ್ಕೆ ನಮ್ಮನ್ನು ಕರೆದೊಯ್ಯುತ್ತದೆ. ಮಗುವಿಗೆ ಮಾನವ ಪರಿಸರವೊಂದು ಉಪಲಬ್ಧವಿರುತ್ತದೆ ಮತ್ತು ಮಗುವು ವೈವಿಧ್ಯಪೂರ್ಣ ಸಂದರ್ಭಗಳಲ್ಲಿ ಸಂಬಂಧಿಸಿದ ವಿವಿಧ ವ್ಯಕ್ತಿಗಳೊಂದಿಗೆ ವ್ಯವಹರಿಸುತ್ತಿರುತ್ತದೆ ಎಂಬುದು ಮಗುವಿನಲ್ಲಿ ಈ ಸಾಮರ್ಥ್ಯದ ನಿರ್ಮಾಣವಾಗಲು ನಿರ್ಣಾಯಕವಾದದ್ದಾಗಿದೆ.

**ಮಕ್ಕಳು ಅನುಕರಣೆಯಿಂದ ಕಲಿಯುತ್ತಾರೆಯೇ?**

ಮನುಷ್ಯ ಜಗತ್ತಿನೊಂದಿಗೆ ವ್ಯವಹರಿಸುವುದರಿಂದ ಮಗುವು ಕಲಿಯುತ್ತದೆ ಎಂಬುದನ್ನು ಒಮ್ಮೆ ನಾವು ಗುರುತಿಸಿದೆವೆಂದರೆ ಈ ವ್ಯವಹಾರದ ಸ್ವರೂಪವೂ ಸಹ ಅದರ ಕಲಿಕೆಯನ್ನು ಪ್ರಭಾವಿಸಲು ಸಾಧ್ಯ ಎಂಬುದನ್ನೂ ಗುರುತಿಸಬಹುದಾಗಿರುತ್ತದೆ. “ಮಕ್ಕಳು ಅನುಕರಣೆಯಿಂದ ಕಲಿಯುತ್ತಾರೆ” ಎಂಬ ನಂಬಿಕೆ ವ್ಯಾಪಕವಾಗಿದೆ. ನಾವು ಮಗುವಿಗಾಗಿ ಯಾವ ಬಗೆಯ ಅನುಭವಗಳನ್ನು ನಿರ್ಮಿಸುತ್ತೇವೆ ಎನ್ನುವುದನ್ನು ಇದು ಪ್ರಭಾವಿಸುವುದರಿಂದ ನಂಬಿಕೆಯನ್ನು ಪರಿಶೀಲಿಸುವುದು ಅಗತ್ಯವಾಗುತ್ತದೆ. ಮನುಷ್ಯರು ಅನುಕರಣೆಯಿಂದಲೇ ಕಲಿಯುತ್ತಾರೆ ಎಂದಾದರೆ ಕಲಿಕಾ ಪ್ರಕ್ರಿಯೆಯನ್ನು ಈ ಕೆಳಗಿನಂತೆ ರೂಪಿಸಬಹುದು; ನೀವೇನು ಮಾಡುತ್ತಿದ್ದೀರೋ ಅದನ್ನು ಸುಮ್ಮನೆ ಗಮನಿಸಲು ಮಕ್ಕಳಿಗೆ ಅವಕಾಶ ಮಾಡಿಕೊಡಿ; ನಿಮ್ಮನ್ನು ಅನುಕರಿಸುವಂತೆ ಅವರಿಗೆ ಹೇಳಿ ಮತ್ತು ಅವರು ತಪ್ಪು ಮಾಡಿದಾಗಲೆಲ್ಲ ಸರಿಪಡಿಸಿ. ಅವರು ತಪ್ಪಾಗಿ ಮಾಡಿದ ಕೆಲಸವನ್ನೇ ಮತ್ತೆ ಮತ್ತೆ ಸರಿಪಡಿಸಿ ಮಾಡುವಂತೆ ನೋಡಿಕೊಳ್ಳುತ್ತ ಇದನ್ನು ಮುಂದುವರಿಸಬಹುದು. ಆದಾಗ್ಯೂ ಶಾಲೆಗೆ ಬರುವ ಮೊದಲೇ ಮಗು ಅದಾಗಲೇ ಸಾಕಷ್ಟು ಜ್ಞಾನವನ್ನು ಆರ್ಜಿಸಿದೆ ಎಂಬುದನ್ನು ನೋಡಿದಾಗ ಇದು ಸೂಕ್ತವಾದ ಪ್ರಕ್ರಿಯೆಯಲ್ಲ ಎಂಬುದು ಸ್ಪಷ್ಟವಾಗುತ್ತದೆ. ಅದು ಸಂಭಾಷಣೆಗಳಲ್ಲಿ ಯಾವೆಲ್ಲ ವಾಕ್ಯಗಳನ್ನು ಬಳಸುತ್ತದೋ ಅವನ್ನು ಅದು ಬೇರೆಯವರಿಂದ ಕೇಳಿದಷ್ಟನ್ನೇ ಆಧರಿಸಿ ನಿರ್ಮಿಸಿರಲು ಸಾಧ್ಯವೇ ಇಲ್ಲ. ಅದು ಬಳಸುವ ಬಹುತೇಕ ವಾಕ್ಯಗಳನ್ನು ಅದು ಹಿಂದೆಂದೂ ಕೇಳಿದ್ದೇ ಇಲ್ಲ. ವಾಕ್ಯಗಳನ್ನು ಬಳಸಿದ ಸಂದರ್ಭಗಳೂ ಸಹಿತ ಅದಕ್ಕೆ ಎದುರಾಗಿರಲಿಕ್ಕಿಲ್ಲ. ಮಾನವ ಕಲಿಕೆಯ ಬಗೆಗಿನ ನಮ್ಮ ತಿಳಿವಳಿಕೆಯ ಪ್ರಸ್ತುತ ಹಂತದಲ್ಲಿ ಈ ಕಲಿಕಾ ಪ್ರಕ್ರಿಯೆಯು

ಸಂಪೂರ್ಣವಾಗಿ ಅಪ್ರಸ್ತುತವೆಂದು ನಾವು ತೋರಿಸಲಾರೆವು. ಆದರೂ ಮಗು ಏನೆಲ್ಲವನ್ನೂ ತಿಳಿದಿದೆಯೊ ಅದರ ಒಂದು ಸಣ್ಣ ಭಾಗ ಮಾತ್ರವೇ ಈ ರೀತಿಯ ಪ್ರಕ್ರಿಯೆಗಳಿಂದ ಪ್ರಭಾವಿತವಾಗಿರಬಹುದು ಎಂಬುದು ಸ್ಪಷ್ಟವಾಗಿದೆ.

**ಕಲಿಯುವ ಮಗುವಿನ ಲಕ್ಷಣಗಳು**

ಜಗತ್ತನ್ನು ಪರಿಶೋಧಿಸಬೇಕೆಂಬ ಮಾನವ ಬಯಕೆಯೇ ಕಲಿಕಾ ಪ್ರಕ್ರಿಯೆಯ ಪ್ರಮುಖ ಬೋಧನೆಯಾಗಿದೆ. ಈ ಶೋಧನೆಯಲ್ಲಿ ಅದು ಹೆಚ್ಚು ಹೆಚ್ಚು ಲೋಕಾನುಭವವನ್ನು ಹೊಂದಲು ಮತ್ತು ಅದರೊಂದಿಗಿನ ತನ್ನ ಸಂಬಂಧಗಳನ್ನು ವಿಸ್ತರಿಸಿಕೊಳ್ಳಲು ಬಯಸುತ್ತದೆ. ಹೊಸ ಅನುಭವಗಳನ್ನು ಪಡೆದುಕೊಳ್ಳಲು, ಹೊಸದನ್ನು ಮಾಡಲು ಮತ್ತು ಸವಾಲುಗಳನ್ನು ಗ್ರಹಿಸುವ ಸಾಮರ್ಥ್ಯವನ್ನು ಹೊಂದಲು ಆಂತರಿಕ ಪ್ರೇರಣೆಯೊಂದು ಮನುಷ್ಯನಲ್ಲಿರುತ್ತದೆ.

ಎರಡನೆಯ ಪ್ರಮುಖ ಅಂಶವೆಂದರೆ, ದೃಢಸಂಕಲ್ಪ ಮತ್ತು ಏನನ್ನಾದರೂ ಮಾಡಲೇಬೇಕೆಂಬ, ಸುಲಭವಾಗಿ ಕೈ ಚೆಲ್ಲಬಾರದೆಂಬ ಉತ್ಕಟೇಚ್ಛೆ. ನಡೆಯುವುದನ್ನು ಕಲಿಯುತ್ತಿರುವ ಮಗುವು ನಿಲ್ಲಲು ಪ್ರಯತ್ನಿಸುತ್ತದೆ, ಬೀಳುತ್ತದೆ ಆದರೂ ಬಿಡದೇ ಯತ್ನಿಸುತ್ತದೆ. ಮಾತನಾಡಲು ಕಲಿಯುವಾಗ ತಾನು ಹೇಳಿದ್ದು ಯಾರಿಗೂ ತಿಳಿಯುತ್ತಿಲ್ಲವೆಂದು ಮಗುವು ಕಂಡುಕೊಳ್ಳುತ್ತದೆ; ಅದೆಷ್ಟು ಅರ್ಥಮಾಡಿಕೊಂಡಿದೆ ಎನ್ನುವುದು ಸ್ಪಷ್ಟವಿರದಿದ್ದರೂ ಅದು ಮಾತು ಕಲಿಯುವುದನ್ನಂತೂ ಮುಂದುವರಿಸುತ್ತದೆ. ಅಂದರೆ, ತಾನು ಕಲಿಯಬೇಕೆಂದು ಬಯಸಿದ್ದನ್ನು ಕಲಿಯಲು ಹೆಣಗಾಡುವ ದೃಢಸಂಕಲ್ಪವಂತೂ ಇದ್ದೇ ಇರುತ್ತದೆ.

ಮೂರನೆಯ ಪ್ರಮುಖ ಲಕ್ಷಣವೆಂದರೆ, ತಾನಾಗಿಯೇ ಕ್ರಿಯಾಶೀಲವಾಗುವ, ತಾನೇ ಎಲ್ಲವನ್ನೂ ಅಭಿವ್ಯಕ್ತಿಸುವ ಬಯಕೆ. ಈ ಪ್ರಕ್ರಿಯೆಯಲ್ಲಿ ತನ್ನ ಪಾತ್ರವೇನು ಅಥವಾ ಏನಾಗಲಿದೆ ಎಂಬುದೇ ಮಗುವಿಗೆ ಮುಖ್ಯವಾಗುತ್ತದೆಯೇ ವಿನಾ ಅದರ ಫಲಿತಾಂಶವಿಲ್ಲ.

ನಾಲ್ಕನೆಯ ಲಕ್ಷಣವೆಂದರೆ, ಮಿತಿಯಿಲ್ಲದ ಕುತೂಹಲ - ಏನಾಗುತ್ತಿದೆ, ಯಾರಿಗೆ, ಏಕೆ ಎಂಬ ಕುರಿತ ಕುತೂಹಲ. ಮಾನವ ಜೀವಿಯು ಬಾಲ್ಯದಿಂದಲೂ ತನ್ನ ಸುತ್ತಲಿನ ಎಲ್ಲದರ ಬಗೆಗೂ ಕಲಿಯಬಯಸುತ್ತದೆ. ಪ್ರಪಂಚದೊಂದಿಗೆ ಹೆಚ್ಚು ಪರಿಣಾಮಕಾರಿಯಾಗಿ ವ್ಯವಹರಿಸುವ ಸಾಮರ್ಥ್ಯವನ್ನು ಪಡೆಯಬಯಸುವುದರಿಂದ ಅದು ವಿಶ್ವಕುತೂಹಲಿ. ಬಹುಶಃ ಈ ಕುತೂಹಲವೇ ಪರಿಶೋಧನೆಗೆ ಪ್ರಚೋದನೆಯಾಗಿ ಮತ್ತು ಸ್ವಂತಿಕೆಯ ಹಂಬಲವಾಗಿ ಪರಿಣಮಿಸುವ ಮೂಲ ಲಕ್ಷಣವಾಗಿದೆ. ಈ ಲಕ್ಷಣವೇ ಹೊಸ ಅನುಭವಗಳನ್ನು ಅರಸುವಂತೆ ಮತ್ತು ಹೊಸ ಸನ್ನಿವೇಶಗಳು, ಸವಾಲುಗಳು ಮತ್ತು ಸಾಹಸಗಳಲ್ಲಿ ತೊಡಗಿಕೊಳ್ಳುವಂತೆ ಮಗುವನ್ನು ಪ್ರಚೋದಿಸುತ್ತದೆ. ತನ್ನ

ಪಾಲಕರು ಅನ್ವೇಷಿಸಲು ಇಷ್ಟಪಡದಿರುವುದನ್ನು ಶೋಧಿಸಲು ಅದು ಹಿಂಜರಿಯಲಾರದು; ದೃಢ ಸಂಕಲ್ಪದಿಂದ ಸ್ವತಂತ್ರವಾಗಿ ತನ್ನ ಕುತೂಹಲವನ್ನು ತಣಿಸಿಕೊಳ್ಳಲು ಹಿಂದೆಗೆಯಲಾರದು.

**ಈ ಗುಣಲಕ್ಷಣಗಳ ಇಂಗಿತ**

ಈ ನಾಲ್ಕು ಗುಣಲಕ್ಷಣಗಳು ವಯಸ್ಕರೊಂದಿಗಿನ ಯಾವ ಬಗೆಯ ಪಾರಸ್ಪರಿಕತೆಯು ಮಗುವಿನ ಕಲಿಕೆಗೆ ಸಹಕಾರಿ ಎಂಬುದನ್ನು ಸೂಚಿಸುತ್ತವೆ. ಇದು ಮಗುವಿನ ಕುರಿತ ಕಾಳಜಿಯಿಂದ ಅದಕ್ಕೆ ಅನ್ವೇಷಿಸಿಕೊಳ್ಳಲು, ಸ್ವಪ್ರೇರಣೆಯಿಂದ ಕಾರ್ಯನಿರ್ವಹಿಸಲು ಅನುಮತಿಸುವುದು, ಅದರ ಇಚ್ಛೆ ಮತ್ತು ಸಂಕಲ್ಪಗಳನ್ನು ಗುರುತಿಸುವುದು, ಅದರ ಸಾಮರ್ಥ್ಯವನ್ನು ಗೌರವಿಸುವುದು ಇವನ್ನೆಲ್ಲ ಒಳಗೊಳ್ಳುತ್ತದೆ. ಮಗು ತನ್ನ ಅನುಭವವನ್ನು ಗ್ರಹಿಸುತ್ತದೆ ಮತ್ತು ಸ್ವತಃ ಅನ್ವೇಷಿಸಿದಾಗ ಇನ್ನೂ ಹೆಚ್ಚು ಕಲಿಯುತ್ತದೆ ಎನ್ನುವುದನ್ನು ಹಿರಿಯರು ಗುರುತಿಸಬೇಕೆಂಬುದು ಇದರ ಇಂಗಿತ. ಇದನ್ನು ಮಾಡಲು ಹಿರಿಯರು ಮಕ್ಕಳಿಗೆ ಅವಕಾಶಗಳನ್ನು ಒದಗಿಸಬಹುದು ಮತ್ತು ಮಗು ಅಪಾಯಕಾರಿಯಲ್ಲದ ಸವಾಲು ಮತ್ತು ಸಾಹಸಗಳಲ್ಲಿ ಮಾತ್ರವೇ ನಿರತವಾಗಿದೆ ಎಂಬುದನ್ನು ಖಚಿತಪಡಿಸಿಕೊಳ್ಳಬಹುದು. ತರಗತಿಯು ಮನೆಗಿಂತ ಭಿನ್ನವಾಗಿರುವ ಸ್ಥಳ, ಮಗು ಹೆಚ್ಚು ಹೊತ್ತು ಕಾಲ ಕಳೆಯುವ ಮತ್ತೊಂದು ಪರಿಸರ ಇದೇ. ಇವುಗಳ ನಡುವಿನ ವ್ಯತ್ಯಾಸವನ್ನು ಗುರುತಿಸುವುದು ತುಂಬ ಮುಖ್ಯ. ತರಗತಿಯೆಂದರೆ ವಿವಿಧ ಹಿನ್ನೆಲೆ ಮತ್ತು ಅನುಭವವಿರುವ ಮಕ್ಕಳ ಗುಂಪಿಗೆ ಕಲಿಕೆಯನ್ನು ಆಯೋಜಿಸುವ ತಾಣ, ಅಲ್ಲಿ ಮಗು ತಲುಪಬೇಕಾದ ಹಂತದ ಕಠಿಣ ನಿರೀಕ್ಷೆಗಳಿರುತ್ತವೆ. ಮತ್ತು, ಅನೇಕ ಸಲ, ಮಗುವಿನ ಭಾಷೆ ಮತ್ತು ಸಂಸ್ಕೃತಿಯನ್ನು ಶಿಕ್ಷಕರು ಅರ್ಥಮಾಡಿಕೊಂಡಿರುವುದಿಲ್ಲ ಅಥವಾ ಮೆಚ್ಚಿಕೊಂಡಿರುವುದಿಲ್ಲ. ಮಗುವು ಶಿಕ್ಷಕರೊಂದಿಗೆ ಹೊಂದಿರುವ ಸಂಬಂಧವು ಮನೆಯಲ್ಲಿ ಹಿರಿಯರೊಂದಿಗೆ ಹೊಂದಿರುವ ಸಂಬಂಧಕ್ಕಿಂತ ತೀರ ಭಿನ್ನವಾದದದ್ದು. ಶಿಕ್ಷಕರ ಕಾಳಜಿಯೂ ಸಹಿತ ಭಿನ್ನ ಬಗೆಯದು. ಶಾಲೆಯಲ್ಲಿ ದೊರಕುವ ಸಮಯ ಮತ್ತು ಅವಕಾಶಗಳು ಮಿತವಾದವು. ಪ್ರತಿಯೊಂದು ಮಗುವೂ ತನಗೆ ಬೇಕಾದುದನ್ನು ಅನ್ವೇಷಿಸಲು, ತನಗೆ ಆ ಹೊತ್ತಿನಲ್ಲಿ ಆಸಕ್ತಿ ಮೂಡಿಸಿರುವುದನ್ನು ಕಲಿಯಲು ಅನುಮತಿಸಲಾಗುವುದಿಲ್ಲ. ಮಗುವಿನ ಗುಣಲಕ್ಷಣಗಳಲ್ಲಿ ತರಗತಿಗಳಿಗೆ ಯಾವೆಲ್ಲ ಇಂಗಿತಾರ್ಥಗಳಿವೆ ಎಂದು ನಾವು ಯೋಚಿಸಬೇಕೆಂದಾದಲ್ಲಿ ಈ ಎಲ್ಲ ವ್ಯತ್ಯಾಸಗಳನ್ನು ಗುರುತಿಸಿಕೊಳ್ಳುವುದು ಅಗತ್ಯ.

ಮಗುವಿನ ನಾಲ್ಕು ಗುಣಲಕ್ಷಣಗಳು - ಮಿತಿಯಿಲ್ಲದ ಕುತೂಹಲ, ಸ್ವಾತಂತ್ರ್ಯದ ತೀವ್ರ ಬಯಕೆ, ಅನ್ವೇಷಿಸುವ ಮತ್ತು ಪ್ರಯೋಗ ಮಾಡಿ ನೋಡುವ ಅಗತ್ಯ ಮತ್ತು ಸ್ವತಃ ಮಾಡಬೇಕೆಂಬ

ಹಂಬಲ - ಶಾಲೆಯಲ್ಲಿ ಮಕ್ಕಳಿಗೆ ಕಲಿಕಾವಕಾಶಗಳನ್ನು ಒದಗಿಸುವುದಕ್ಕೆ ತಳಹದಿಯಾಗಬೇಕು. ಇವು ವಿಭಿನ್ನ ಜ್ಞಾನ ಶಿಸ್ತುಗಳಲ್ಲಿ ವಿಭಿನ್ನ ಬಗೆಗಳಲ್ಲಿ ಅಭಿವ್ಯಕ್ತಗೊಳ್ಳುತ್ತವೆ.

ಭಾಷಾ ಕಲಿಕೆಯ ಸಂದರ್ಭದಲ್ಲಿ ಮಗುವು ಈಗಾಗಲೇ ತನ್ನ ಮನೆಭಾಷೆಯನ್ನು ಬಳಸುವ ಸಾಮರ್ಥ್ಯವನ್ನು ಹೊಂದಿದೆ, ವಿಸ್ತಾರವಾದ ಶಬ್ದ ಭಂಡಾರವನ್ನು ತನ್ನದಾಗಿಸಿಕೊಂಡಿದೆ, ವಾಕ್ಯ ಪ್ರಯೋಗದ ಸಮಗ್ರ ಪರಿಣತಿಯನ್ನು ಪಡೆದಿದೆ ಮತ್ತು ಸಂಭಾಷಣೆಯಲ್ಲಿ ತೊಡಗಿಕೊಳ್ಳುವ ಸಾಮರ್ಥ್ಯವನ್ನು ಹೊಂದಿದೆ ಎಂಬುದನ್ನು ನಾವು ಗುರುತಿಸಬೇಕಾಗುತ್ತದೆ. ಮಗುವಿಗೆ ಸ್ವತಃ ಏನನ್ನಾದರೂ ಮಾಡುವ ಅವಕಾಶವನ್ನು ನೀಡಬೇಕು ಎನ್ನುವುದನ್ನೂ ಸಹ ನಾವು ಗುರುತಿಸುವುದು ಅಗತ್ಯ. ಅಂದರೆ, ಅದರ ವಿಚಾರಗಳನ್ನು ಅಭಿವ್ಯಕ್ತಿಸಲು, ಭಾಷೆಯನ್ನು ವಿಭಿನ್ನವಾಗಿ ಬಳಸಲು ಮತ್ತು ತನ್ನ ದೃಷ್ಟಿಕೋನವನ್ನು ಸಮರ್ಥಿಸಿಕೊಳ್ಳಲು ವಾದಗಳನ್ನು ಬೆಳೆಸಲು ಅವಕಾಶವನ್ನು ಕೊಡಬೇಕು. ಶಿಕ್ಷಕರನ್ನು ಯಾಂತ್ರಿಕವಾಗಿ ಅನುಕರಿಸುವುದರಿಂದಾಗಲಿ, ಬೇರೆ ಬೇರೆ ಆಕರಗಳಿಂದ ನಕಲು ಮಾಡುವುದರಿಂದಾಗಲಿ ಪ್ರಯೋಜನವಾಗಲಾರದು. ಏಕೆಂದರೆ ಅದು ಮಕ್ಕಳಿಗೆ ಸವಾಲೂ ಆಗುವುದಿಲ್ಲ, ಅವರ ಆಸಕ್ತಿಯನ್ನೂ ಕೆರಳಿಸುವುದಿಲ್ಲ. ಭಾಷಾ ಸಾಮರ್ಥ್ಯದ ನಿರ್ಮಾಣವು ಮಗುವಿಗೆ ವಿಭಿನ್ನ ಸನ್ನಿವೇಶಗಳೊಂದಿಗೆ ತೊಡಗಿಸಿಕೊಳ್ಳುವ, ಹೆಚ್ಚು ಸಂಕೀರ್ಣವಾದ ವಾದಗಳನ್ನು ಬೆಳೆಸುವ, ಹೆಚ್ಚು ಸಂಕೀರ್ಣವಾದ ವಿಚಾರಗಳೊಂದಿಗೆ ವ್ಯವಹರಿಸುವ ಮತ್ತು ಅಮೂರ್ತ ಪರಿಕಲ್ಪನೆಗಳ ಮೇಲೂ ಸಹ ದೀರ್ಘಾವಧಿ ಸಂವಾದದಲ್ಲಿ ತೊಡಗಿಕೊಳ್ಳುವ ಸಾಮರ್ಥ್ಯವಿದೆ ಎಂದು ಖಚಿತಪಡಿಸಿಕೊಳ್ಳುವುದನ್ನು ಅಪೇಕ್ಷಿಸುತ್ತದೆ. ಹೀಗಾಗಿ ನಮ್ಮ ತರಗತಿಯ ಪ್ರಕ್ರಿಯೆಗಳು ಮಕ್ಕಳಿಗೆ ಇವನ್ನೆಲ್ಲ ಆರ್ಜಿಸಲು ಅವಕಾಶ ಒದಗಿಸಿಕೊಡುವುದು ಅಗತ್ಯವಾಗಿದೆ.

**ಮಕ್ಕಳ ಭಾಷೆಗಳಿಗೆ ಅನುಮತಿ ನೀಡುವುದು**

ಮಗುವು ತನ್ನ ಸುತ್ತಲಿನ ತಾನು ತಿಳಿದಿರುವ ಮತ್ತು ಹೀಗಾಗಿಯೇ ತನ್ನನ್ನು ಅದರಲ್ಲಿ ತೊಡಗಿಸಿಕೊಂಡು ಅದರಲ್ಲಿನಸಂಗತಿಗಳನ್ನು ಅನ್ವೇಷಿಸುವಾಗ ಅತ್ಯುತ್ತಮವಾಗಿ ಕಲಿಯುತ್ತದೆ ಎಂಬುದನ್ನು ನಾವು ಗುರುತಿಸುವುದು ಅವಶ್ಯ. ಹೊಸ ವಾಕ್ಯಗಳನ್ನು ರಚಿಸಲು, ಹೊಸ ಬಗೆಯ ಸನ್ನಿವೇಶಗಳಲ್ಲಿ ಭಾಗವಹಿಸಲು ಮಗುವಿಗೆ ಒಂದಷ್ಟು ಆತ್ಮವಿಶ್ವಾಸ ಮತ್ತು ಭಾಷೆಯ ಮೇಲಿನ ಹಿಡಿತ ಬೇಕಾಗುತ್ತದೆ. ಹೀಗಾಗಿ ತರಗತಿಯ ಭಾಷೆಯು ಮಗುವಿನ ಭಾಷೆಯೊಂದಿಗೆ ಯಾವುದೇ ಸಂಬಂಧವನ್ನು ಹೊಂದಿಲ್ಲದಿದ್ದರೆ ಮತ್ತು ಅದು ತಿಳಿದಿರುವ ಪದಗಳನ್ನು ಆಧರಿಸಿರದಿದ್ದರೆ, ಅದಕ್ಕೆ ಹೊಸ ಸವಾಲುಗಳನ್ನು ಸ್ವೀಕರಿಸುವ ಮತ್ತು ಅನ್ವೇಷಿಸುವ ಆತ್ಮವಿಶ್ವಾಸವನ್ನು ಪಡೆದುಕೊಳ್ಳುವ ಮಾರ್ಗವೇ ಇಲ್ಲವಾಗುತ್ತದೆ. ವಿಶ್ವಾಸಾರ್ಹ ಕಲಿಕಾ ಪ್ರಕ್ರಿಯೆಯೊಂದಿಗೆ ಆತ್ಮವಿಶ್ವಾಸದಿಂದ

ಭಾಷಾಕಲಿಕೆಯಲ್ಲಿ ತೊಡಗುವುದರ ಬದಲು ಅದು ಸಾಕಷ್ಟು ಅವಕಾಶವಾಗಲೀ ಸಮಯವಾಗಲಿ ಇಲ್ಲದೆ ಆಟಕ್ಕುಂಟು ಲೆಕ್ಕಕ್ಕಿಲ್ಲ ಎಂಬ ತರಹದ ಆಟವನ್ನು ಆಡುತ್ತಿರಬೇಕಾಗುತ್ತದೆ.

ತರಗತಿಗಳಲ್ಲಿ ಸಾಮಾನ್ಯವಾಗಿ ವಿವಿಧ ಭಾಷಾ ಹಿನ್ನೆಲೆಯ ಮಕ್ಕಳಿರುತ್ತಾರೆ. ಹೀಗಾಗಿ ಎಲ್ಲಾ ಮಕ್ಕಳನ್ನೂ ತಲುಪಬಹುದಾದ ಒಂದು ಸಂಪರ್ಕ ಭಾಷೆಯನ್ನು ಗುರುತಿಸಿಕೊಳ್ಳುವುದು ಮತ್ತು ಅದನ್ನು ಕಲಿಯುವುದು ಶಿಕ್ಷಕರು ಅನುಸರಿಸಬೇಕಾದ ಪ್ರಮುಖ ಸೂತ್ರವಾಗಿದೆ. ತರಗತಿಯ ಸಂವಾದಗಳು ಆ ಭಾಷೆಯಲ್ಲೇ ನಡೆಯಬೇಕು. ಇದು ಮಕ್ಕಳ ಭಾಷಾ ಬಳಕೆಯ (ತರ್ಕ, ಕಲ್ಪನೆ, ಆತ್ಮವಿಶ್ವಾಸ, ಸಂವಹನ, ಜ್ಞಾನ ವಿಸ್ತರಣೆ ಇತ್ಯಾದಿ) ಸಾಮರ್ಥ್ಯವನ್ನು ಬಲಪಡಿಸುತ್ತದೆ. ಸಂವಹನದ ಅಡೆತಡೆಗಳನ್ನು ನಿವಾರಿಸುವ ಸವಾಲನ್ನು ಶಿಕ್ಷಕರು ಎದುರಿಸಲೇಬೇಕು.

ಮಕ್ಕಳಿಗೆ ತಮ್ಮ ಸ್ವಂತ ಭಾಷೆಯನ್ನು ಬಳಸಲು ಮತ್ತು ತರಗತಿಯಲ್ಲಿರುವ ಎಲ್ಲಾ ಭಾಷೆಗಳೊಂದಿಗೆ ಆಟವಾಡಲು ಅವಕಾಶ ನೀಡಬೇಕು. ತಮ್ಮನ್ನು ತಾವು ಅಭಿವ್ಯಕ್ತಿಸಲು ಅವರು ವಿವಿಧ ಭಾಷೆಗಳ ಪದಗಳನ್ನು ಬಳಸಬಹುದು. ಇದರಿಂದ ಅವರ ಸಂವಾದ ಸಾಮರ್ಥ್ಯವು ಬಲಗೊಳ್ಳುತ್ತದೆ.

## ಮಕ್ಕಳಿಗೆ ಗೌರವ ಮತ್ತು ಧನಾತ್ಮಕ ಸ್ವ-ಭಾವ ಅವಶ್ಯಕ

ಮಗುವಿನಲ್ಲಿ ಆತ್ಮವಿಶ್ವಾಸವನ್ನು ಕುದುರಿಸುವ ಎರಡನೆಯ ನಿರ್ಣಾಯಕ ಅಂಶವೆಂದರೆ ಧನಾತ್ಮಕವಾದ ಸ್ವ-ಭಾವನೆ, ಮಗುವಿನ ಸಂಸ್ಕೃತಿ, ಭಾಷೆ ಮತ್ತು ಅಸ್ಮಿತೆ ಅವು ಗೌರವಿಸಲ್ಪಡಬೇಕು. ಅವನ್ನು ಗೌರವಿಸಿದಾಗಲಷ್ಟೇ ಮಗು ತನ್ನ ಅಭೀಪ್ಸೆ ಮತ್ತು ಕುತೂಹಲವನ್ನು ವ್ಯಕ್ತಪಡಿಸಲು ಮತ್ತು ಅನ್ವೇಷಿಸಲು ಕಲಿಯುತ್ತದೆ. ತಾನು ಹೇಳುವುದು ಅಥವಾ ಭಾವಿಸುವುದು ಗೌರವಿಸಲ್ಪಡುತ್ತದೆ ಎಂಬ ವಿಶ್ವಾಸ ಇಲ್ಲದೆ ಹೋದಾಗ ಕಲಿಕೆಯ ಯಾವುದೇ ನಿರ್ಣಾಯಕ ಗುಣಲಕ್ಷಣವೂ ಅದರ ನಡವಳಿಕೆಯಲ್ಲಿ ಕಂಡುಬರದು.

ಇದರ ಇಂಗಿತವನ್ನು ಮತ್ತು ತರಗತಿಯಲ್ಲಿ ಏನು ಮಾಡಬಹುದೆಂಬುದನ್ನು ಅರ್ಥಮಾಡಿಕೊಳ್ಳಲು ಈ ಸಾಧ್ಯತೆಗಳನ್ನು ಪರಿಗಣಿಸಿ: ಬೋರ್ಡಿನ ಮೇಲೆ ವಸ್ತುವೊಂದರ ಚಿತ್ರಣವನ್ನು ಬಿಡಿಸಿ ಅದೇನೆಂದು ಮಕ್ಕಳನ್ನು ಕೇಳುವುದು. ಮಕ್ಕಳು ಹೇಳುವ ಹೆಸರುಗಳನ್ನೆಲ್ಲ ಬೋರ್ಡಿನ ಮೇಲೆ ಬರೆಯುವುದು. ಆಮೇಲೆ ಅದರ ಕುರಿತು ಮಕ್ಕಳು ತಮಗೆ ಏನೇನು ತಿಳಿದಿದೆಯೋ ಅವೆಲ್ಲವನ್ನೂ ಅವರ ಸ್ವಂತ ಭಾಷೆಯಲ್ಲಿ ವಿವರಿಸಲು ಬಿಡುವುದು. ಯಾವುದೇ ಮಗು

ಸ್ವತಃ ಬೇರೆ ಭಾಷೆಯನ್ನೂ ಸಂಪರ್ಕ ಭಾಷೆಯನ್ನೂ ನಿರರ್ಗಳವಾಗಿ ಬಳಸಲು ಸಾಧ್ಯವಾಗದಿದ್ದರೆ ಅದು ಹೇಳಿದ್ದನ್ನು ವಿವರಿಸಬಲ್ಲ ಮಕ್ಕಳಂತೂ ತರಗತಿಯಲ್ಲಿ ಇದ್ದೇ ಇರುತ್ತಾರೆ. ಆದಾಗ್ಯೂ, ಮಗುವಿಗೆ ತನ್ನ ಸ್ವಂತ ಭಾಷೆಯಲ್ಲಿ ಎಷ್ಟು ಹೊತ್ತು ಬೇಕಾದರೂ ಮಾತನಾಡಬಹುದು ಎಂಬ ಸ್ಪಷ್ಟ ತಿಳಿವಳಿಕೆ ಇರಬೇಕು. ಒಂದು ಘಟನೆಯ ಕುರಿತೊ ಚಟುವಟಿಕೆಯ ಬಗೆಗೊ ಇನ್ನಾವುದೇ ವಿಷಯದ ಮೇಲೋ ಮಾತನಾಡುವ ಹಲವು ಚಟುವಟಿಕೆಗಳನ್ನು ಹಮ್ಮಿಕೊಳ್ಳಬಹುದು. ಮಗು ಇಷ್ಟಪಡುವ ವ್ಯಕ್ತಿಯ ಬಗ್ಗೆಯೋ ಅಥವಾ ಅದು ಪ್ರೀತಿಸುವ ಅವರದೇ ಬಾಳಿನ ಒಂದು ಕ್ಷಣವನ್ನೋ ವರ್ಣಿಸುವಂತೆ ಮಕ್ಕಳನ್ನು ಆಹ್ವಾನಿಸಬಹುದು.

ಭಾಷೆಯೆಂದರೆ ಪದಗಳು ಮತ್ತು ವಾಕ್ಯಗಳಿಗಿಂತ ತುಂಬ ಹೆಚ್ಚಿನದೆಂಬುದನ್ನು ನಾವು ನೆನಪಿಡಬೇಕು. ವಾಸ್ತವದಲ್ಲಿ ಅದು ನಮ್ಮ ಇಡೀ ವ್ಯಕ್ತಿತ್ವ. ಆದ್ದರಿಂದ ಮಗುವಿಗೆ ತನ್ನ ಸ್ವಂತ ಭಾಷೆಯನ್ನು ಬಳಸಲು ಅವಕಾಶ ನೀಡುವುದೆಂದರೆ ಅದಕ್ಕೆ ತನ್ನನ್ನು ತಾನು ಅಭಿವ್ಯಕ್ತಿಸಲು ಮತ್ತು ತಾನಿರುವಂತೆ ತನ್ನನ್ನು ಸಾದರಪಡಿಸಲು ಅವಕಾಶ ಮಾಡಿಕೊಡುವುದು.

***

**ಹೃದಯ್ ಕಾಂತ್ ದೇವನ್** (ಹಾರ್ಡಿ) ಪ್ರಸ್ತುತ ಉದಯಪುರದ ವಿದ್ಯಾಭವನ ಸೊಸೈಟಿಯ ಶೈಕ್ಷಣಿಕ ಸಲಹೆಗಾರರಾಗಿದ್ದಾರೆ. ಅವರು ಏಕಲವ್ಯ ಸಂಸ್ಥೆಯ ಸಂಸ್ಥಾಪಕ ಗುಂಪಿನ ಸದಸ್ಯರಾಗಿದ್ದರು. ಅವರು ಕಳೆದ ಮೂವತ್ತೈದು ವರ್ಷಗಳಿಂದ ಶಿಕ್ಷಣರಂಗದಲ್ಲಿ ವಿವಿಧ ಬಗೆಯಲ್ಲಿ, ಮತ್ತು ಅದರ ಎಲ್ಲಾ ಆಯಾಮಗಳಲ್ಲಿ ದುಡಿಯುತ್ತಿದ್ದಾರೆ. ನಿರ್ದಿಷ್ಟವಾಗಿ ಹೇಳುವುದಾದರೆ, ಅವರು ರಾಜ್ಯದ ಶೈಕ್ಷಣಿಕ ಸಂರಚನೆಗಳಲ್ಲಿ ಶೈಕ್ಷಣಿಕ ನಾವೀನ್ಯತೆಯ ಪ್ರಯತ್ನಗಳು ಮತ್ತು ಸಂಪನ್ಮೂಲಗಳ ಮಾರ್ಪಾಟಿನ ಪ್ರಕ್ರಿಯೆಯಲ್ಲಿ ಭಾಗಿಯಾಗಿದ್ದಾರೆ. ಅವರ ಸಂಪರ್ಕಕ್ಕೆ vbsudr@yahoo.com